## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : 1781(2090) (ಒಳಾಡಳಿತ ಇಲಾಖೆಯಿಂದ ವರ್ಗಾವಣೆಗೊಂಡಿದೆ) |
| **ಸದಸ್ಯರ ಹೆಸರು** | : ಶ್ರೀ ಶಶೀಲ್ ಜಿ.ನಮೋಶಿ (ಶಿಕ್ಷಕರ ಕ್ಷೇತ್ರ) |
| **ಉತ್ತರಿಸುವ ದಿನಾಂಕ** | : 17.03.2022 |
| **ಉತ್ತರಿಸುವ ಸಚಿವರು** | : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಖಾಸಗಿ ಅನುದಾನಿತ ಪ್ರೌಢ, ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ 2015ರ ಪೂರ್ವದಲ್ಲಿ ನಿವೃತ್ತಿ, ನಿಧನದಿಂದ ತೆರವಾಗಿರುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಈ ಹಿಂದೆ ಆರ್ಥಿಕ ಇಲಾಖೆ ಅನುಮತಿ ನೀಡಿದ್ದು, ಕೋವಿಡ್ ಹಿನ್ನೆಲೆಯಲ್ಲಿ ಈ ಅನುಮತಿಗೆ ತಡೆಯಾಜ್ಞೆ ನೀಡಿರುವುದು ನಿಜವೇ; (ಮಾಹಿತಿ ನೀಡುವುದು) | ಖಾಸಗಿ ಅನುದಾನಿತ ಮತ್ತು ಪದವಿಪೂರ್ವ ಕಾಲೇಜುಗಳಲ್ಲಿ ದಿನಾಂಕ:31-12-2015ರವರೆಗೆ ನಿವೃತ್ತಿ, ರಾಜಿನಾಮೆ, ನಿಧನ ಮತ್ತು ಇತರೆ ಕಾರಣಗಳಿಂದ ತೆರವಾಗಿರುವ ನಿಗದಿತ ಕಾರ್ಯಭಾರವಿರುವ ಬೋಧಕ ಹುದ್ದೆಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 14 ಎಸ್.ಇ.ಪಿ 2017, ದಿನಾಂಕ:25/09/2018 ಹಾಗೂ ಸರ್ಕಾರದ ಪತ್ರ: ದಿನಾಂಕ:23-07-2021ರಲ್ಲಿ ಭರ್ತಿ ಮಾಡಲು ಆದೇಶ ಹೊರಡಿಸಲಾಗಿದೆ.<br>ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8, ದಿನಾಂಕ:10/06/2020ರಲ್ಲಿ ರಾಜ್ಯದಲ್ಲಿ ಕೋವಿಡ್-19ರ ಹಿನ್ನೆಲೆಯಲ್ಲಿ ತೀವ್ರ ಆರ್ಥಿಕ ಸಂಕಷ್ಟದಲ್ಲಿರುವುದರಿಂದ ಖಾಸಗಿ ಅನುದಾನಿತ ಶಾಲಾ ಕಾಲೇಜುಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ತುಂಬಲು ನಿರ್ಬಂಧವಿರುತ್ತದೆ. |
| ಆ | ಸದರಿ ತಡೆಯಾಜ್ಞೆಯನ್ನು ಸರ್ಕಾರ ಯಾವಾಗ ಹಿಂಪಡೆಯಲಾಗುತ್ತದೆ; | ಪ್ರಸ್ತುತ ಆರ್ಥಿಕ ಮಿತವ್ಯಯ ಜಾರಿಯಲ್ಲಿದ್ದು, ಡಿಸೆಂಬರ್ 2015ರ ಅಂತ್ಯದವರೆಗೆ ಮರಣ, ನಿವೃತ್ತಿ, ರಾಜಿನಾಮೆ ಇತರೆ ಕಾರಣಗಳಿಂದ ತೆರವಾದ 2181 ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ: 23-02-2021ರಲ್ಲಿ 257 ಬೋಧಕ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸಹಮತಿ ನೀಡಿರುತ್ತದೆ. ಅದರನ್ವಯ, ಹುದ್ದೆಗಳ ಭರ್ತಿಗೆ ಕ್ರಮವಹಿಸಲಾಗುತ್ತಿದೆ.<br>ಮುಂದುವರೆದು, ಬಾಕಿ ಉಳಿದಿರುವ 1924 ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಕೋರಿ ಪ್ರಸ್ತಾವನೆಯನ್ನು ಪುನ: ಸಲ್ಲಿಸಲಾಗಿದೆ. |
| ಇ | 2015ರ ನಂತರ ನಿವೃತ್ತಿ, ನಿಧನದಿಂದ ತೆರವಾದ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ದಿನಾಂಕ:01/01/2016 ರಿಂದ 31/12/2020ರ ವರೆಗಿನ ಅವಧಿಯಲ್ಲಿ ಅನುದಾನಿತ ಪ್ರೌಢಶಾಲೆ ಮತ್ತು ಪದವಿಪೂರ್ವ ಕಾಲೇಜುಗಳಲ್ಲಿ ನಿವೃತ್ತಿ, ರಾಜಿನಾಮೆ, ನಿಧನ ಮತ್ತು ಇತರೆ ಕಾರಣಗಳಿಂದ ತೆರವಾಗಿರುವ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಮೂರು ಆಯುಕ್ತಾಲಯದಿಂದ/ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ ರವರಿಂದ ಮಾಹಿತಿ ಪಡೆಯಲಾಗುತ್ತಿದೆ. |

ಇಪಿ 118 ಎಸ್‌ಇಎಸ್ 2022

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು